ಪರಮ ದಯಾಮಯನೂ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

ಪ್ರವಾದಿ ಮುಹಮ್ಮದರು(ಸ) ದೇವನ ಅಂತಿಮ ಸಂದೇಶವಾಹಕರಾಗಿದ್ದಾರೆ. ಅವರು ಮಾನವನ ಬದುಕಿನ ಪ್ರತಿಯೊಂದು ರಂಗಕ್ಕೂ ಒಂದು ಯಶಸ್ವೀ ನಾಯಕತ್ವವನ್ನು ನೀಡಿದರು. ದೇವನ ಸಂದೇಶವನ್ನು ಮಾನವರಿಗೆ ತಲುಪಿಸುವುದು, ಜನರನ್ನು ಏಕದೇವನ ದಾಸ್ಯ-ಆರಾಧನೆಗಾಗಿ ಸಿದ್ಧಗೊಳಿಸುವುದು ಮತ್ತು ಇತರ ಎಲ್ಲ ದಾಸ್ಯಗಳಿಂದ ಮಾನವರನ್ನು ವಿಮೋಚಿಸುವುದು- ಇವು ಪ್ರವಾದಿಯವರ(ಸ) ಮೇಲೆ ದೇವನು ವಹಿಸಿದ ವಿಶೇಷ ಹೊಣೆಗಾರಿಕೆಯಾಗಿತ್ತು. ಈ ಕಾರ್ಯವನ್ನು ಅವರು ಬಹಳ ಯಶಸ್ವಿಯಾಗಿ ನೆರವೇರಿಸಿದರು. ಕೇವಲ 23 ವರ್ಷಗಳಲ್ಲಿ ಒಂದು ಅದ್ಭುತ ಕ್ರಾಂತಿಗೆ ಮುನ್ನುಡಿ ಬರೆದ ಪ್ರವಾದಿಯವರ(ಸ) ಬದುಕು ಮಾತ್ರ ಬಹಳ ಸರಳವಾಗಿತ್ತು. ಈ ಮಹಾನ್ ಆದರ್ಶ ವ್ಯಕ್ತಿಯ(ಸ) ಸರಳತೆ – ಸಜ್ಜನಿಕೆಯು ವಿರೋಧಿಗಳನ್ನೂ ಬೆರಗು ಗೊಳಿಸುತ್ತಿತ್ತು.

ಈ ಪುಟ್ಟ ಕೃತಿಯಲ್ಲಿ ಪ್ರವಾದಿ ಮುಹಮ್ಮದ್‌ರ(ಸ) ಬದುಕಿನ ಬಗ್ಗೆ ಬಹಳ ಸರಳವಾಗಿ ಬೆಳಕು ಚೆಲ್ಲಲಾಗಿದೆ. ದೀರ್ಘ ಅಧ್ಯಯನ ಬಯಸುವವರು ಶಾಂತಿ ಪ್ರಕಾಶನ ಪ್ರಕಟಿಸಿರುವ 'ಪ್ರವಾದಿ ಮುಹಮ್ಮದ್(ಸ) ಜೀವನ ಮತ್ತು ಸಂದೇಶ', 'ಅರೇಬಿಯಾದ ಆ ಪ್ರವಾದಿ', 'ಮಾನವಕುಲದ ವಿಮೋಚಕ' ಮುಂತಾದ ಗ್ರಂಥಗಳಿಂದ ತಮ್ಮ ಜಿಜ್ಞಾಸೆಯನ್ನು ತಣಿಸಬಹುದು. ಅಲ್ಲಾಹನು ಅನುಗ್ರಹಿಸಲಿ.

ಶಾಂತಿ ಪ್ರಕಾಶನ

## ಅನುಕ್ರಮಣಿಕೆ

# ಅಂತಿಮ ಪ್ರವಾದಿ ಮುಹಮ್ಮದ್(ಸ)

ಪ್ರವಾದಿ ಮುಹಮ್ಮದ್‌ರನ್ನು(ಸ) ಲೋಕದಾದ್ಯಂತ ಮುಸ್ಲಿಮರು ದೇವನ ಅಂತಿಮ ಪ್ರವಾದಿಯೆಂದು ನಂಬುತ್ತಾರೆ. ಪವಿತ್ರ ಕುರ್‌ಆನ್‌ನಿಂದಲೂ ಪ್ರವಾದಿವರ್ಯರ(ಸ) ವಚನಗಳಿಂದಲೂ ಅವರು ಸಮಸ್ತ ಲೋಕದವರಿಗಾಗಿ ಕಳುಹಿಸಲ್ಪಟ್ಟವರೆಂದು ತಿಳಿದು ಬರುತ್ತದೆ. ಅವರು ಅರೇಬಿಯಾ ದೇಶದ ಮಕ್ಕಾ ನಗರದಲ್ಲಿ ಜನಿಸಿದರು. ಅವರ ಮಾತುಗಳನ್ನು ಪ್ರಪ್ರಥಮವಾಗಿ ಮಕ್ಕಾದ ಜನರು ಕೇಳಿದರು. ಆದರೆ ಅವರ ಮಾತುಗಳು ಕೇವಲ ಅರಬರಿಗೆ ಸೀಮಿತವಾದುದಾಗಿರಲಿಲ್ಲ. ಅವರ ಬೋಧನೆಗಳು ಸಕಲ ಮಾನವ ಕುಲಕ್ಕಾಗಿದೆ. ಅವರು ಕ್ರಿ. ಶ. 571ರಲ್ಲಿ ಜನಿಸಿದರು. ಅವರ ಜನನದ ನಂತರ ಸುಮಾರು 1,400 ವರ್ಷಗಳು ಸಂದರೂ ಅವರ ಬೋಧನೆಗಳು ಸಂಪೂರ್ಣವಾಗಿ ಈಗಲೂ ಸುರಕ್ಷಿತವಾಗಿದೆ. ಭೂಮುಖದ ಯಾವುದೇ ಭಾಗವೂ ಪ್ರವಾದಿವರ್ಯರ(ಸ) ಅನುಯಾಯಿಗಳಿಂದ ವಿರಹಿತವಾಗಿಲ್ಲ.

## ಪರಸ್ಪರ ಅರಿತುಕೊಳ್ಳುವುದರ ಅಗತ್ಯ

ಪ್ರವಾದಿ ಮುಹಮ್ಮದ್‌ರವರ(ಸ) ಅನುಯಾಯಿಗಳು ಲೋಕದ ಎಲ್ಲೆಡೆಯಿದ್ದರೂ ದುರದೃಷ್ಟವಶಾತ್ ಅವರು ವಾಸಿಸುತ್ತಿರುವ ಸಮಾಜಗಳಲ್ಲಿ ಅವರ ಮತ್ತು ಇತರ ಧರ್ಮಗಳ ಅನುಯಾಯಿಗಳ ಮಧ್ಯೆ ಭಾರೀ ವೈಚಾರಿಕ ಅಂತರವಿದೆ. ನಾವು ಒಟ್ಟಿಗೆ ವಾಸಿಸುತ್ತೇವಾದರೂ ಪರಸ್ಪರ ಒಬ್ಬರು ಇನ್ನೊಬ್ಬರ ಧರ್ಮ, ಆಚಾರ-ವಿಚಾರಗಳ ಬಗ್ಗೆ ಅರಿತಿರುವುದಿಲ್ಲ. ಇದರ ಅಗತ್ಯವನ್ನು ಬಹುಶಃ ನಾವು ಮನಗಾಣುವುದಿಲ್ಲ. ಆದರೆ ವಾಸ್ತವದಲ್ಲಿ

ಅದೊಂದು ಮಹತ್ವಪೂರ್ಣ ಸಂಗತಿಯಾಗಿದೆ. ನಾವು ಪರಸ್ಪರ ಒಬ್ಬರು ಇನ್ನೊಬ್ಬರ ವಿಚಾರಗಳನ್ನು ಅರಿಯಬೇಕಾದ ಅಗತ್ಯವಿದೆ. ಹಾಗೆ ಅರಿಯದಿರಲು ಮುಖ್ಯ ಕಾರಣವೇನೆಂದರೆ, ನಾವು ನಮ್ಮದೇ ಧರ್ಮದ ಆಚಾರ-ವಿಚಾರಗಳನ್ನು ಸರಿಯಾಗಿ ಅರ್ಥ ಮಾಡಿಕೊಂಡಿಲ್ಲ. ಎರಡನೆಯದಾಗಿ, ಧರ್ಮವನ್ನು ನಾವು ಒಂದು ಖಾಸಗಿ ವಿಷಯವೆಂದು ಭಾವಿಸಿದ್ದೇವೆ. ಅದನ್ನು ಬಚ್ಚಿಡಲು ಮತ್ತು ನಮ್ಮ ವೈಯಕ್ತಿಕ ಜೀವನಕ್ಕೆ ಸೀಮಿತವಾಗಿಡಲು ಕಲಿಸಲಾಗುತ್ತದೆ. ಆದರೆ ಈಗ ಪರಿಸ್ಥಿತಿ ಬದಲಾಗುತ್ತಿದೆ. ಈಗ ಅದರ ಅಗತ್ಯವನ್ನು ಮನಗಾಣಲಾಗುತ್ತಿದೆ. ಈ ಪ್ರಶ್ನೆಯು ಅತ್ಯಂತ ಪ್ರಯೋಜನಕಾರಿ ಯಾಗಬಹುದು. ಅದರಿಂದಾಗಿ ನಾವು ಧರ್ಮವನ್ನು ಅದರ ನೈಜರೂಪದಲ್ಲಿ ದರ್ಶಿಸಬಹುದು. ಪರಸ್ಪರ ಸೌಹಾರ್ದ ಸಂಬಂಧ ಬೆಳೆಯಬಹುದು. ನೆರೆಹೊರೆಯವರೊಂದಿಗೂ ಉತ್ತಮ ಸಂಬಂಧ ಸ್ಥಾಪನೆಯಾಗಬಹುದು.

## ಮುಹಮ್ಮದ್(ಸ) – ಓರ್ವ ಐತಿಹಾಸಿಕ ವ್ಯಕ್ತಿ

ಪ್ರವಾದಿ ಮುಹಮ್ಮದ್(ಸ) ಓರ್ವ ಮಾನವರಾಗಿದ್ದರು. ಮಾನವ ತಂದೆ-ತಾಯಿಗಳ ಸಂತಾನವಾಗಿದ್ದರು. ಅವರು ಲೋಕದಲ್ಲಿ ಇತರ ಮನುಷ್ಯರು ಬಾಳುವಂತೆಯೇ ಬಾಳಿದರು. ತಮ್ಮ 63ನೆಯ ವಯಸ್ಸಿನಲ್ಲಿ ಲೋಕಕ್ಕೆ ವಿದಾಯ ಕೋರಿದರು. ಅವರು ಈ ಲೋಕಕ್ಕೆ ಎರಡು ವಸ್ತುಗಳನ್ನು ಬಿಟ್ಟು ಹೋದರು – ದೇವ ಗ್ರಂಥವಾಗಿರುವ ಪವಿತ್ರ ಕುರ್‌ಆನ್ ಮತ್ತು ಹದೀಸ್‌ಗಳೆಂದು ಕರೆಯಲಾಗುವ ಅವರ ಚರ್ಯೆ-ಬೋಧನೆಗಳು.

ನಾವು ಧರ್ಮಗಳ ಇತಿಹಾಸವನ್ನು ನೋಡಿದರೆ, ಧರ್ಮಗ್ರಂಥಗಳನ್ನೂ ಧರ್ಮಗುರುಗಳನ್ನೂ ಜನರು ಸಂಪೂರ್ಣವಾಗಿ ಮರೆತು ಬಿಟ್ಟರು ಅಥವಾ ಅವರ ಬೋಧನೆಗಳು ತಮ್ಮ ನೈಜ ರೂಪದಲ್ಲಿ ಉಳಿಯಲಿಲ್ಲವೆಂದು ತಿಳಿದು ಬರುತ್ತದೆ. ಕಾಲಕ್ರಮೇಣ ಅವರ ನೈಜ ವ್ಯಕ್ತಿ ಚಿತ್ರಣವನ್ನು ಜನರಿಗೆ ಗುರುತಿಸಲು ಕಷ್ಟವಾಗುವಷ್ಟರ ಮಟ್ಟಿಗೆ ಅವರ ಕುರಿತು ಕಟ್ಟುಕತೆಗಳನ್ನು ಸೃಷ್ಟಿಸಲಾಯಿತು. ಅವರಲ್ಲಿ ಕೆಲವರಂತೂ ಇತಿಹಾಸ ಪೂರ್ವದ ವ್ಯಕ್ತಿಗಳಾಗಿದ್ದಾರೆ.

ಆದರೆ ಪ್ರವಾದಿ ಮುಹಮ್ಮದ್‌ರ(ಸ) ವೈಶಿಷ್ಟ್ಯವೆಂದರೆ ಅವರು ತಂದಂತಹ ಗ್ರಂಥ ಪವಿತ್ರ ಕುರ್‌ಆನ್, ಒಂದಕ್ಷರದ ವ್ಯತ್ಯಾಸವೂ ಇಲ್ಲದೆ ಲೋಕದ ಎಲ್ಲೆಡೆ ಸಿಗುತ್ತದೆ. ಅದೇ ರೀತಿ ಅವರ ಜೀವನದ ಸಂಪೂರ್ಣ ವಿವರಗಳು ಸುರಕ್ಷಿತವಾಗಿ ಉಳಿದುಕೊಂಡಿವೆ. ಅವರು ಯಾರ ತಿಳುವಳಿಕೆಗೂ ಬಾರದಂತಹ ಗುಪ್ತ ವ್ಯಕ್ತಿಯಾಗಿರಲಿಲ್ಲ. ಅವರು ಓರ್ವ ಐತಿಹಾಸಿಕ ವ್ಯಕ್ತಿ ಯಾಗಿದ್ದು, ಅವರ ಆಗಮನವು ಮಾನವಲೋಕದ ಒಂದು ಐತಿಹಾಸಿಕ ತಿರುವಿನ ವೇಳೆ ಆಯಿತು.

ಯುರೋಪಿನ ನವನಾಗರಿಕತೆಯ ಕಾಲದ ಬಳಿಕ ಬುದ್ಧಿಜೀವಿಗಳು, ಪ್ರವಾದಿ ಮುಹಮ್ಮದ್(ಸ)ರ ವ್ಯಕ್ತಿತ್ವವನ್ನು ರಹಸ್ಯವಾಗಿಡಲು ಬಹಳಷ್ಟು ಪ್ರಯತ್ನಪಟ್ಟರು. ಆದರೆ ಅದರಲ್ಲಿ ಅವರಿಗೇ ಮುಖಭಂಗವಾಯಿತು. ಕೊನೆಗೂ ಅವರು ವಾಸ್ತವಿಕತೆಯನ್ನು ಅಂಗೀಕರಿಸಲೇಬೇಕಾಯಿತು. ಥಾಮಸ್ ಕಾರ್ಲೈಲ್‌ರ ಅನಿಸಿಕೆ ಏನೆಂದರೆ– "ಈ ವ್ಯಕ್ತಿ[ಮುಹಮ್ಮದ್(ಸ)]ಯ ನಾಲ್ಕೂ ಸುತ್ತ ಸುಳ್ಳಿನ ಸರಮಾಲೆಯನ್ನೇ ಹೆಣೆಯಲಾಯಿತು. ಇದು ನಮ್ಮ ಪಾಲಿಗೇ ಅವಮಾನಕಾರಿಯಾಗಿದೆ."

## ಮುಹಮ್ಮದ್(ಸ) ದೇವ ಸಂದೇಶವಾಹಕರು

ಪ್ರವಾದಿ ಮುಹಮ್ಮದ್‌ರವರದು(ಸ) ಒಂದು ಪರಿಪೂರ್ಣ ವ್ಯಕ್ತಿತ್ವವಾಗಿದೆ. ಅವರ ಜೀವನದ ಅಧ್ಯಯನದಿಂದ ತಿಳಿದು ಬರುವುದೇನೆಂದರೆ ಅವರು ಜೀವನದ ಪ್ರತಿಯೊಂದು ರಂಗಕ್ಕೂ ಒಂದು ಯಶಸ್ವೀ ನಾಯಕತ್ವವನ್ನು ನೀಡಿದರು. ತಂದೆ, ಪತಿ, ರಾಜಕಾರಣಿ, ವ್ಯಾಪಾರಿ, ಸೇನಾಧಿಪತಿ, ನ್ಯಾಯಾಧೀಶ, ಬಡವರ ಮತ್ತು ದುರ್ಬಲರ ರಕ್ಷಕ ಇತ್ಯಾದಿ ಎಲ್ಲ ನೆಲೆಗಳಲ್ಲೂ ಅವರನ್ನು ಓರ್ವ ಯಶಸ್ವೀ ನಾಯಕನಾಗಿ ನಾವು ದರ್ಶಿಸಬಹುದು. ಆದರೆ ಅವರು ಮೂಲಭೂತವಾಗಿ ಓರ್ವ ದೇವ ಸಂದೇಶವಾಹಕರಾಗಿದ್ದಾರೆ. ದೇವನ ಸಂದೇಶವನ್ನು ಮಾನವರಿಗೆ ತಲಪಿಸುವುದು, ಜನರನ್ನು ಏಕ ದೇವನ ದಾಸ್ಯ ಆರಾಧನೆಗಾಗಿ ಸಿದ್ಧಗೊಳಿಸುವುದು ಮತ್ತು ಇತರ ಎಲ್ಲ ದಾಸ್ಯಗಳಿಂದ ಮಾನವರನ್ನು ವಿಮೋಚಿಸುವುದು, ದೇವನು ಅವರಿಗೆ ವಹಿಸಿ ಕೊಟ್ಟಿದ್ದ

ವಿಶೇಷ ಹೊಣೆಗಾರಿಕೆಯಾಗಿತ್ತು. ಈ ಕಾರ್ಯವನ್ನು ಅವರು ಬಹಳ ಯಶಸ್ವಿಯಾಗಿ ನೆರವೇರಿಸಿದರು.

## ಇಸ್ಲಾಮ್-ಒಂದು ಸಂಪೂರ್ಣ ಜೀವನ ವ್ಯವಸ್ಥೆ

ಇಸ್ಲಾಮ್ ಎಂದೊಡನೆ, ಕ್ರೈಸ್ತ ಧರ್ಮ, ಬೌದ್ಧಧರ್ಮ ಮತ್ತಿತರ ಧರ್ಮಗಳಂತೆ ಅದೂ ಒಂದು ಧರ್ಮವಾಗಿದೆಯೆಂದು ಭಾವಿಸಲಾಗುತ್ತದೆ. ಆದರೆ ವಾಸ್ತವಿಕತೆ ಹಾಗಲ್ಲ. ಧರ್ಮವೆಂದರೆ ಕೆಲವು ಬೋಧನೆಗಳು, ಕೆಲವು ಪೂಜಾ ವಿಧಿಗಳು ಹಾಗೂ ಕೆಲವು ವೈಯಕ್ತಿಕ ಉಪಾಸನಾ ಕ್ರಮಗಳ ಹೆಸರೆಂದು ಸಾಮಾನ್ಯವಾಗಿ ಭಾವಿಸಲಾಗುತ್ತದೆ. ಆದರೆ ಇಸ್ಲಾಮ್ ಒಂದು ಸಂಪೂರ್ಣ ಜೀವನ ವ್ಯವಸ್ಥೆಯಾಗಿದ್ದು, ಅದು ಜೀವನದ ಎಲ್ಲ ರಂಗಗಳಲ್ಲೂ ನಮಗೆ ಸರಿಯಾದ ಮಾರ್ಗದರ್ಶನ ಮಾಡುತ್ತದೆ. ಗೃಹ, ದಾಂಪತ್ಯ, ಕೌಟುಂಬಿಕ, ವ್ಯಾಪಾರ, ರಾಜಕೀಯ ಮತ್ತು ಆಧ್ಯಾತ್ಮಿಕ ಮೊದಲಾದ ಜೀವನದ ಸಕಲ ರಂಗಗಳಲ್ಲೂ ಅದು ಸೂಕ್ತ ಮಾರ್ಗದರ್ಶನ ಮಾಡುತ್ತದೆ. ಇಸ್ಲಾಮ್ ನಮಗೆ ಮಾರ್ಗದರ್ಶನ ಮಾಡದಂತಹ, ಜೀವನದ ಯಾವ ರಂಗವೂ ಇಲ್ಲ. ಮುಹಮ್ಮದ್‌ರವರು(ಸ) ಕೆಲವು ಪೂಜಾಕ್ರಮಗಳನ್ನು ಕಲಿಸಲಿಕ್ಕಾಗಿ ಬಂದವರಲ್ಲ. ಬದಲಾಗಿ ಅವರು ಸಂಪೂರ್ಣ ಜೀವನಕ್ಕೆ ಸಮಗ್ರ ಸಂವಿಧಾನವನ್ನು ತಂದು ಕೊಟ್ಟರು. ಅದೂ ಯಾವುದೇ ಕಾಲ್ಪನಿಕ ಲೋಕದ ಸಂವಿಧಾನವಾಗಿರಲಿಲ್ಲ. ಬದಲಾಗಿ ಅತ್ಯಂತ ಸರಳ ಮತ್ತು ಪ್ರಾಯೋಗಿಕವಾದ ಸಂವಿಧಾನವಾಗಿತ್ತು. ಇಸ್ಲಾಮಿನ ನೈತಿಕ ವ್ಯವಸ್ಥೆಯು ಗುಹೆಗಳಲ್ಲಿ, ಕಾಡುಗಳಲ್ಲಿ ಅಥವಾ ಮಠಗಳಲ್ಲಿ ಆತ್ಮೋನ್ನತಿಯ ಮೆಟ್ಟಿಲುಗಳನ್ನು ಏರುವ ಮಂದಿಗಿರುವುದಲ್ಲ. ಅದು ಜೀವನದ ರಾಜಮಾರ್ಗದಲ್ಲಿ ನಡೆಯುವವರಿಗೆ ಮಾರ್ಗದರ್ಶನ ನೀಡುತ್ತದೆ. ಈ ವ್ಯವಸ್ಥೆಯು ಶಿಕ್ಷಕರು ಮತ್ತು ವಿದ್ಯಾರ್ಥಿಗಳನ್ನು, ಪತಿ-ಪತ್ನಿಯರನ್ನು, ತಂದೆ-ಮಕ್ಕಳನ್ನು, ವ್ಯಾಪಾರಿಗಳನ್ನು ಮತ್ತು ನೆರೆಕರೆಯವರನ್ನು, ಕಾರ್ಮಿಕರನ್ನು ಮತ್ತು ಮಾಲಕರನ್ನು, ರೈತರನ್ನು ಮತ್ತು ಅಧಿಕಾರಿಗಳನ್ನು, ಪೊಲೀಸರನ್ನು ಮತ್ತು ಸೈನಿಕರನ್ನು ಹಾಗೂ ಜನಪ್ರತಿನಿಧಿಗಳನ್ನು ಸದಾಚಾರ ಸಂಪನ್ನರನ್ನಾಗಿ ಮಾಡಬಯಸುತ್ತದೆ.

ದೇವಾರಾಧನೆಯ ಕುರಿತು ಒಂದು ಕ್ರಾಂತಿಕಾರಿ ವಿಷಯ ಇಸ್ಲಾಮಿನಲ್ಲಿ ನಮಗೆ ಸಿಗುತ್ತದೆ. ಪವಿತ್ರ ಕುರ್‌ಆನ್ ಹೇಳುತ್ತದೆ– ನಾವು ಮನುಷ್ಯರನ್ನು ನಮ್ಮ ಆರಾಧನೆಗಾಗಿ ಸೃಷ್ಟಿಸಿರುತ್ತೇವೆ. ಈ ಆರಾಧನೆಯು ಮಸೀದಿಗೆ ಹೋಗಿ ನಮಾಝ್ ಮಾಡುವುದು ಮತ್ತು ಏಕಾಂತದಲ್ಲಿ ಕುಳಿತು ದೇವನಾಮ ಸ್ಮರಣೆ ಮಾಡುವುದಕ್ಕೆ ಸೀಮಿತಗೊಳಿಸುವುದರಿಂದ ಸಾಧಿತವಾಗದು. ಹಾಗಾಗುತ್ತಿದ್ದರೆ ಅದನ್ನು ಒಂದು ನಿಶ್ಚಿತ ಸಮಯದಲ್ಲೇ ಮಾಡಬೇಕಾಗಿತ್ತು. ಪವಿತ್ರ ಕುರ್‌ಆನ್ ಮತ್ತು ಪ್ರವಾದಿ ಮುಹಮ್ಮದ್‌ರವರ(ಸ) ಬೋಧನೆಗಳಿಂದ ನಮಗೆ ತಿಳಿಯುವುದೇನೆಂದರೆ, ನಮಾಝ್ ಮಾಡುವುದು ಮಾತ್ರ ಇಬಾದತ್ (ಆರಾಧನೆ) ಅಲ್ಲ. ಬದಲಾಗಿ ಶ್ರಮಪಟ್ಟು ಪ್ರಾಮಾಣಿಕತೆಯಿಂದ ಸಂಪಾದನೆ ಮಾಡುವುದೂ ಇಬಾದತ್ ಆಗಿದೆ. ಮನೆಮಂದಿಯ ಆವಶ್ಯಕತೆಗಳನ್ನೂ ಪೂರೈಸುವುದೂ ಇಬಾದತ್ ಆಗಿದೆ. ಅದೇ ರೀತಿ, ನೆರೆಹೊರೆಯವರಿಗೆ ಸಹಾಯ ಮಾಡುವುದು, ವಿವಾಹವಾಗುವುದು ಮತ್ತು ಜನರ ಹಕ್ಕು ಬಾಧ್ಯತೆಗಳನ್ನು ಈಡೇರಿಸುವುದು ಕೂಡ ಇಬಾದತ್ ಆಗಿದೆ. ಅಷ್ಟೇ ಅಲ್ಲ, ದಾರಿಯಲ್ಲಿರುವ ಮುಳ್ಳು ಅಥವಾ ಹಾನಿಕಾರಕ ವಸ್ತುಗಳನ್ನು ಸರಿಸುವುದು ಕೂಡಾ ಇಬಾದತ್ ಆಗಿದೆ. ಈ ಎಲ್ಲ ಕಾರ್ಯಗಳಿಗೂ ದೇವನ ಬಳಿ ಪುಣ್ಯ ದೊರೆಯುತ್ತದೆ. ಈ ಕರ್ಮಗಳ ಉತ್ತಮ ಫಲಿತಾಂಶವು ಮಾನವನಿಗೆ ಈ ಲೋಕದಲ್ಲೂ ಸಿಗುತ್ತದೆ. ಮರಣಾನಂತರ ಪರಲೋಕದಲ್ಲೂ ದೊರೆಯಲಿದೆ.

## ಮೂಲಭೂತ ವಿಶ್ವಾಸಗಳು

ಇಸ್ಲಾಮಿನ ಮೂಲಭೂತ ವಿಶ್ವಾಸಗಳು ಮೂರು:

1) ಏಕದೇವತ್ವ– ಅರ್ಥಾತ್ ದೇವನೊಂದಿಗೆ ಯಾರನ್ನೂ ಭಾಗೀದಾರರನ್ನಾಗಿ ಮಾಡದಿರುವುದು.

2) ಪ್ರವಾದಿತ್ವ– ಅಂದರೆ ದೇವನ ವತಿಯಿಂದ ಮಾನವರ ಮಾರ್ಗದರ್ಶನಕ್ಕಾಗಿ ಬಂದ ಎಲ್ಲ ಪ್ರವಾದಿಗಳನ್ನು ನಂಬುವುದು.

3) ಪರಲೋಕ– ಅರ್ಥಾತ್ ಮರಣಾನಂತರ ಇನ್ನೊಂದು ಜೀವನವಿದೆಯೆಂದು ದೃಢವಾಗಿ ನಂಬುವುದು.

ಪ್ರವಾದಿ ಮುಹಮ್ಮದ್‌ರವರ(ಸ) ಬೋಧನೆಗಳು ಈ ಮೂರು ಮೂಲಭೂತ ವಿಶ್ವಾಸಗಳಲ್ಲಿ ಕೇಂದ್ರೀಕೃತಗೊಂಡಿದೆ. ಪವಿತ್ರ ಕುರ್‌ಆನ್ ಕೂಡಾ ಇದನ್ನೇ ಪದೇ ಪದೇ ಹೇಳುತ್ತದೆ. ಈ ಪ್ರಪಂಚದ ಸೃಷ್ಟಿಕರ್ತ ಮತ್ತು ಒಡೆಯ ಒಬ್ಬನೇ ಆಗಿದ್ದಾನೆ. ಇಲ್ಲಿ ಅನೇಕ ದೇವರುಗಳಿಲ್ಲ. ನಾವು ಸತ್ತು ಪುನಃ ಜೀವಂತಗೊಂಡು ಅವನ ಮುಂದೆ ನಿಲ್ಲಬೇಕಾಗಿದೆ. ಅವನು ನಮ್ಮ ಕರ್ಮಗಳ ವಿಚಾರಣೆ ನಡೆಸಿ ತೀರ್ಮಾನ ಮಾಡಲು ಒಂದು ದಿನ ನಿಶ್ಚಯಿಸಿದ್ದಾನೆ. ಮಾನವರಿಗೆ ಸನ್ಮಾರ್ಗವನ್ನು ತೋರಿಸಲಿಕ್ಕಾಗಿ ದೇವನ ವತಿಯಿಂದ ಪ್ರವಾದಿಗಳು ಮತ್ತು ಸಂದೇಶವಾಹಕರು ಬರುತ್ತಲೇ ಇದ್ದರು. ಅವರ ಪರಂಪರೆಯಲ್ಲಿ ಅತ್ಯಂತ ಕೊನೆಯವರು ಪ್ರವಾದಿ ಮುಹಮ್ಮದ್(ಸ) ಆಗಿರುವರು. ಇಸ್ಲಾಮಿನ ದೃಷ್ಟಿಯಲ್ಲಿ ಈ ವಿಷಯಗಳನ್ನು ಸರಿಯೆಂದು ಒಪ್ಪಿ ಸ್ವೀಕರಿಸಿದವನೇ ಮುಸ್ಲಿಮ್.

## ಮುಹಮ್ಮದ್(ಸ) – ಮಕ್ಕಾದಲ್ಲಿ

ಪ್ರವಾದಿ ಮುಹಮ್ಮದ್‌ರವರು(ಸ) ಮಕ್ಕಾದಲ್ಲಿ ಜನಿಸಿದರು. ಅದೊಂದು ಪುಟ್ಟ ನಗರವಾಗಿತ್ತು. ಪವಿತ್ರ ಕಅಬಾ ಭವನದಿಂದಾಗಿ ಆ ನಗರ ಮಹತ್ವ ಪಡೆದಿತ್ತು. ಹ. ಇಬ್‌ರಾಹೀಮ್(ಅ) ನಿರ್ಮಿಸಿದ ಈ ಪುಟ್ಟ ಭವನವು ಕೇಂದ್ರೀಯ ಬಿಂದುವಾಗಿತ್ತು. ಅದನ್ನು 'ಅಲ್ಲಾಹನ ಭವನ'ವೆಂದು ಕರೆಯಲಾಗುತ್ತದೆ. ಪ್ರವಾದಿಯವರಿಗಿಂತ(ಸ) ಮುಂಚೆಯೂ ಜನರು ಈ ಭವನದ ಹಜ್ಜ್ ಯಾತ್ರೆ ಕೈಗೊಳ್ಳುತ್ತಿದ್ದರು. ಪ್ರವಾದಿವರ್ಯರ(ಸ) ಕಾಲದಲ್ಲೂ ಅದು ಜಾರಿಯಲ್ಲಿತ್ತು. ಅದು ಗೋತ್ರಗಳ ಮತ್ತು ಮುಂದಾಳುಗಳ ಕಾಲವಾಗಿತ್ತು. ಒಂದು ಗೋತ್ರವು ಇನ್ನೊಂದು ಗೋತ್ರದೊಂದಿಗೆ ಸಣ್ಣಪುಟ್ಟ ವಿಷಯಗಳಿಗೆ ಜಗಳಾಡಿ ಪರಸ್ಪರ ರಕ್ತ ಪಿಪಾಸುಗಳಾಗಿ ಮಾರ್ಪಡುತ್ತಿದ್ದರು. ಕೆಲವೊಮ್ಮೆ ಇಂತಹ ಕಲಹಗಳು ಅನೇಕ ಪೀಳಿಗೆಗಳ ವರೆಗೆ ಮುಂದುವರಿಯುತ್ತಿದ್ದುವು. ಅನಕ್ಷರತೆಯು ಸಾಮಾನ್ಯವಾಗಿತ್ತು. ಅಕ್ಷರಾಭ್ಯಾಸ ಇರುವವರು ಅತ್ಯಂತ ವಿರಳವಾಗಿದ್ದರು. ಅಜ್ಞಾನ ಮತ್ತು ಮೂಢನಂಬಿಕೆಗಳು ವ್ಯಾಪಕವಾಗಿದ್ದುವು.

ಪ್ರವಾದಿವರ್ಯರ(ಸ) ತಂದೆಯ ಮರಣ ಅವರ ಜನನಕ್ಕೆ

ಮುಂಚೆಯೇ ಆಗಿತ್ತು. ಅವರಿಗೆ ಆರು ವರ್ಷ ಪ್ರಾಯವಾಗಿದ್ದಾಗ ತಾಯಿಯೊಂದಿಗೆ ಒಮ್ಮೆ ಪ್ರಯಾಣದಿಂದ ಮರಳುವ ಸಮಯದಲ್ಲಿ, ತಾಯಿಯೂ ಇಹಲೋಕ ಯಾತ್ರೆ ಮುಗಿಸಿದರು. ಅನಂತರ ಈ ಅನಾಥ ಬಾಲಕನಿಗೆ ಅವರ ತಾತ ಅಬ್ದುಲ್ ಮುತ್ತಲಿಬರೇ ಸರ್ವಸ್ವವಾಗಿದ್ದರು. ಆದರೆ ಎರಡು ವರ್ಷಗಳಲ್ಲೇ ತಾತ ಕೂಡ ನಿಧನ ಹೊಂದಿದಾಗ ಅವರ ಚಿಕ್ಕಪ್ಪ ಅಬೂತಾಲಿಬ್‌ರು ಮುಹಮ್ಮದ್‌ರವರ(ಸ) ಪೋಷಣೆಯ ಹೊಣೆ ವಹಿಸಿಕೊಂಡರು. ಅವರನ್ನು ತನ್ನ ಬಳಿಯಲ್ಲೇ ಇರಿಸಿದರು. ತನ್ನ ವ್ಯಾಪಾರದ ಯಾತ್ರೆಗಳಲ್ಲಿ ತನ್ನೊಂದಿಗೆ ಕರೆದೊಯ್ಯುತ್ತಿದ್ದರು.

ಮುಹಮ್ಮದ್‌ರವರು(ಸ) ಮಕ್ಕಾದ ಓರ್ವ ಪರಿಶುದ್ಧ ಯುವಕರಾಗಿದ್ದರು. ಇಡೀ ನಗರದ ಕಣ್ಮಣಿಯಾಗಿದ್ದರು. ಯಾರಿಗಾದರೂ ತೊಂದರೆಯಾಗುವಂತಹ ಯಾವ ಕಾರ್ಯವನ್ನೂ ಅವರೆಂದೂ ಮಾಡಿಲ್ಲ. ಆ ಸಮಯದಲ್ಲಿ ಒಂದು ಒಪ್ಪಂದವೇರ್ಪಟ್ಟಿತ್ತು. ಅದರಲ್ಲಿ ಅವರು ಬಹಳ ಆಸಕ್ತಿಯಿಂದ ಭಾಗವಹಿಸಿದರು. ಆ ಒಪ್ಪಂದದಲ್ಲಿ ಈ ಕೆಳಗಿನ ತೀರ್ಮಾನಗಳಾಗಿದ್ದುವು.

- ದೇಶದಿಂದ ಅಶಾಂತಿಯನ್ನು ತೊಲಗಿಸಲಾಗುವುದು.
- ಪ್ರಯಾಣಿಕರಿಗೆ ರಕ್ಷಣೆ ಒದಗಿಸಲಾಗುವುದು.
- ದುರ್ಬಲರಿಗೆ ಸಹಾಯ ಮಾಡಲಾಗುವುದು.
- ಅಕ್ರಮಿಗಳನ್ನು ಮಕ್ಕಾದಲ್ಲಿ ನಿಲ್ಲಲು ಬಿಡಲಾಗದು.

ಮುಹಮ್ಮದ್‌ರವರು(ಸ) ಕೆಲವು ದಿನ ಆಡು ಮೇಯಿಸಿದರು. ಅನಂತರ ವ್ಯಾಪಾರವನ್ನೂ ಮಾಡಿದರು. ತಮ್ಮ ಸದ್ಗುಣ ಮತ್ತು ಸದ್‌ವ್ಯವಹಾರದಿಂದಾಗಿ ಭಾರೀ ಲಾಭ ಗಳಿಸಿದರು. ಅವರನ್ನು ಮಕ್ಕಾದ ಜನರು 'ಅಮೀನ್' (ಪ್ರಾಮಾಣಿಕ) ಮತ್ತು 'ಸಾದಿಕ್' (ಸತ್ಯಸಂಧ) ಎಂಬ ಬಿರುದಿನಿಂದ ಕರೆಯುತ್ತಿದ್ದರು. ಅಮೀನ್ ಎಂದರೆ ಎಂದೂ ವಂಚನೆ ಮಾಡದ ವ್ಯಕ್ತಿ ಮತ್ತು ಸಾದಿಕ್ ಎಂದರೆ ಎಂದೂ ಅಸತ್ಯಕ್ಕೆ ಬೆಂಬಲವಾಗಿ ನಿಲ್ಲದ ವ್ಯಕ್ತಿ ಎಂದರ್ಥ. ಮಕ್ಕಾದಲ್ಲಿ ಸ್ವಯಂ ವ್ಯಾಪಾರ ಮಾಡಲು ಸಾಧ್ಯವಿಲ್ಲದವರು ತಮ್ಮ ಬಂಡವಾಳಗಳನ್ನು ಮುಹಮ್ಮದರಿಗೆ(ಸ) ನೀಡುತ್ತಿದ್ದರು. ಮಕ್ಕಾದ

ಓರ್ವ ಕುಲೀನ ಮನೆತನದ ಖದೀಜಾ ಎಂಬ ವಿಧವೆ ತಮ್ಮ ವ್ಯಾಪಾರವನ್ನು ಇತರರಿಂದ ಮಾಡಿಸುತ್ತಿದ್ದರು. ಅವರು ಮುಹಮ್ಮದ್‌ರವರ(ಸ) ಮೂಲಕ ತಮ್ಮ ಸರಕು ಮಾರಾಟ ಮಾಡಿದಾಗ ಅವರ ವ್ಯವಹಾರದಲ್ಲಿ ಪ್ರಾಮಾಣಿಕತೆ ಕಂಡು ತುಂಬಾ ಪ್ರಭಾವಿತರಾದರು. ಅವರು ಮುಹಮ್ಮದ್‌ರಿಗೆ(ಸ) ತಮ್ಮನ್ನು ವಿವಾಹವಾಗುವಂತೆ ಸಂದೇಶ ಕಳಿಸಿದರು. ಆಗ ಖದೀಜಾರ ವಯಸ್ಸು 40 ವರ್ಷವಾಗಿತ್ತು ಮತ್ತು ಮುಹಮ್ಮದ್‌ರು(ಸ) 25 ವರ್ಷದ ನವ ಯುವಕರಾಗಿದ್ದರು. ಮುಹಮ್ಮದ್‌ರವರು(ಸ) ಈ ಸಂದೇಶವನ್ನು ಸ್ವೀಕರಿಸಿ ಆ ವಿಧವೆಯನ್ನು ವಿವಾಹವಾದರು. ಪ್ರವಾದಿತ್ವ ಲಭಿಸುವುದಕ್ಕಿಂತ ಮುಂಚೆಯೂ ಅವರ ಪ್ರತಿಯೊಂದು ಕೆಲಸವೂ ಆದರ್ಶ ಪ್ರಾಯವಾಗಿತ್ತು.

ಜನರ ಅಜ್ಞಾನ ಮತ್ತು ವಿಗ್ರಹಾರಾಧನೆಯಿಂದ ಅವರ ಮನಸ್ಸು ತುಂಬಾ ನೋಯುತ್ತಿತ್ತು. ಒಬ್ಬ ದೇವನ ಆರಾಧನೆಯನ್ನು ಹೇಗೆ ಮಾಡುವುದು ಮತ್ತು ಜನರನ್ನು ಸನ್ಮಾರ್ಗದಲ್ಲಿ ಹೇಗೆ ತರುವುದು ಎಂದು ಅವರು ಯಾವಾಗಲೂ ಚಿಂತಿಸುತ್ತಿದ್ದರು. ಅವರು ಏಕಾಂತದಲ್ಲಿ ಕುಳಿತು ಈ ಕುರಿತು ಚಿಂತನೆ ನಡೆಸತೊಡಗಿದರು. ನಗರದಿಂದ ದೂರ ಒಂದು ಗುಹೆ ಯಲ್ಲಿ ಧ್ಯಾನಾಸಕ್ತರಾಗಿ ಕುಳಿತುಕೊಳ್ಳ ತೊಡಗಿದರು. ಅಲ್ಲೇ ಒಂದು ದಿನ ದೇವಚರರೊಬ್ಬರು ಪ್ರತ್ಯಕ್ಷವಾಗಿ ತಮ್ಮನ್ನು ಅಲ್ಲಾಹನು ತನ್ನ ಪ್ರವಾದಿಯಾಗಿ ನೇಮಿಸಿರುವನೆಂದು ತಿಳಿಸಿದರು. ತರುವಾಯ ಆ ದೇವಚರ ಆಗಾಗ ಅಲ್ಲಾಹನ ಸಂದೇಶಗಳನ್ನು ಹೊತ್ತು ತರುತ್ತಲಿದ್ದರು. ಮುಹಮ್ಮದ್‌ರವರು(ಸ) ಆ ಸಂದೇಶಗಳನ್ನು ಮಕ್ಕಾದ ಜನರಿಗೆ ತಿಳಿಸುತ್ತಲಿದ್ದರು. ಅವರಿಗೆ ಏಕದೇವನ ಆರಾಧನೆ ಮಾಡುವಂತೆ ವಿನಂತಿಸಿದರು. ಮೂರ್ತಿ ಪೂಜೆ ಬುದ್ಧಿಗೂ ಪ್ರಕೃತಿಗೂ ವಿರುದ್ಧವಾದುದೆಂದು ಮನವರಿಕೆ ಮಾಡಿದರು. ಇದರಿಂದ ಮಕ್ಕಾದ ಜನರು ಒಮ್ಮೆಲೆ ಕುಪಿತರಾದರು. ಈ ಒಂದು ಕರೆ ನೀಡಿದ ಕಾರಣ ಮಕ್ಕಾದ ಅತ್ಯಂತ ಜನಪ್ರಿಯ ವ್ಯಕ್ತಿ ಎಲ್ಲರ ಶತ್ರುವಾಗಿ ಮಾರ್ಪಟ್ಟರು. ಕೆಲವು ಮಂದಿ ಅವರ ಮಾತನ್ನು ಕೂಡಲೇ ಒಪ್ಪಿದರು. ಆದರೆ ಹೆಚ್ಚಿನವರು, ಅದರಲ್ಲೂ ಮಕ್ಕಾದ ಸರದಾರರು ಅವರ ಮಾತು ಕೇಳಲಿಕ್ಕೂ ಸಿದ್ಧರಿರಲಿಲ್ಲ. ಒಂದು

ದಿನ ಕೆಲವು ಮಂದಿ ಪ್ರವಾದಿಯವರ(ಸ) ಬಳಿ ಬಂದು, ನೀವು ಮಕ್ಕಾದ ಸರದಾರರಾಗ ಬಯಸುವುದಾದರೆ ನಾವೆಲ್ಲರೂ ನಿಮ್ಮನ್ನು ನಮ್ಮ ಸರದಾರರಾಗಿ ಅಂಗೀಕರಿಸುತ್ತೇವೆ. ನಿಮಗೇನಾದರೂ ಹಣದಾಸೆಯಿದ್ದರೆ ನಾವು ನಿಮಗೆ ಧನ-ಕನಕಗಳ ರಾಶಿಯನ್ನೇ ತಂದೊಪ್ಪಿಸು ವೆವು. ಇನ್ನು ನೀವೇನಾದರೂ ಸುಂದರ ತರುಣಿಯನ್ನು ವಿವಾಹವಾಗ ಬಯಸುವುದಾದರೆ ಅದರ ವ್ಯವಸ್ಥೆ ಯನ್ನೂ ಮಾಡಬಲ್ಲೆವು. ಆದರೆ ನೀವು ನಮ್ಮ ವಿಗ್ರಹಗಳ ಕುರಿತು ಸಲ್ಲದ ಮಾತುಗಳನ್ನಾಡಬಾರದು ಎಂದು ವಿನಂತಿಸಿದರು. ಪ್ರವಾದಿವರ್ಯರು(ಸ) ಅವರ ಎಲ್ಲ ಬೇಡಿಕೆಗಳನ್ನೂ ತಿರಸ್ಕರಿಸಿದರು ಮತ್ತು "ನೀವು ನನ್ನ ಬಲಗೈ ಯಲ್ಲಿ ಸೂರ್ಯನನ್ನು ಮತ್ತು ಎಡಗೈಯಲ್ಲಿ ಚಂದ್ರನನ್ನು ತಂದಿಟ್ಟರೂ ನಾನು ಈ ಕಾರ್ಯವನ್ನು ಬಿಡಲಾರೆ. ನನಗೆ ದೇವನು ಈ ಹೊಣೆಯನ್ನು ವಹಿಸಿ ಕೊಟ್ಟಿರುವನು" ಎಂದರು.

ಮಕ್ಕಾದಲ್ಲಿ ಪ್ರವಾದಿಯವರನ್ನು(ಸ) ವಿರೋಧಿಸುವುದು ಹೆಚ್ಚತೊಡಗಿತು. ಅವರನ್ನೂ ಅವರ ಸಂಗಾತಿಗಳನ್ನೂ ಅನೇಕ ರೀತಿಯಲ್ಲಿ ಪೀಡಿಸಲಾಯಿತು. ಅವರಿಗೆ ಜೀವಿಸುವುದು ಕಷ್ಟವಾಯಿತು. ಕೊನೆಗೆ ಅವರನ್ನು ಕೊಲ್ಲಲು ತೀರ್ಮಾನಿಸುವಷ್ಟರ ಮಟ್ಟಿಗೆ ಪರಿಸ್ಥಿತಿ ಮುಟ್ಟಿತು. ಈ ಮಧ್ಯೆ ಮಕ್ಕಾದ ಉತ್ತರಕ್ಕಿರುವ ಮದೀನಾ ಎಂಬ ಪಟ್ಟಣದಿಂದ ಕೆಲವು ಜನರು ಬಂದು ಪ್ರವಾದಿವರ್ಯರನ್ನು(ಸ) ಭೇಟಿಯಾದರು. ಅವರು ಇಸ್ಲಾಮಿಗಾಗಿ ಸಕಲ ತ್ಯಾಗ ಬಲಿದಾನಗಳನ್ನೂ ನೀಡಬಲ್ಲೆವು ಎಂದು ಪ್ರತಿಜ್ಞೆಗೈದರು. ಅವರು ಒಮ್ಮೆ 12 ಮಂದಿ ಬಂದಿದ್ದರು. ಎರಡನೆಯ ಸಲ 72 ಮಂದಿ ಇದ್ದರು. ಮದೀನಾದಲ್ಲಿ ಇಸ್ಲಾಮಿನ ಪ್ರಚಾರ ಕಾರ್ಯ ಭರದಿಂದ ಸಾಗತೊಡಗಿತು. ಮದೀನಾದ ಜನರು ಪ್ರವಾದಿವರ್ಯರು(ಸ) ಮಕ್ಕಾದಲ್ಲಿ ಸಂಕಷ್ಟಗಳಲ್ಲಿರುವ ಬದಲು ಮದೀನಾಕ್ಕೆ ಬಂದರೆ ಆಗಬಹುದೆಂದು ಬಯಸಿದರು. ಒಂದು ರಾತ್ರಿ ಪ್ರವಾದಿವರ್ಯರು(ಸ) ತಮ್ಮ ಆಪ್ತ ಸಂಗಾತಿ ಅಬೂಬಕರ್‌ರ(ರ) ಜೊತೆ ಮದೀನಾಕ್ಕೆ ತೆರಳಿದರು. ಪ್ರವಾದಿಯಾಗಿ ನೇಮಕಗೊಂಡ ಬಳಿಕ ಮುಹಮ್ಮದ್‌ರವರು(ಸ) ಮಕ್ಕಾದಲ್ಲಿ 13 ವರ್ಷಗಳ ಕಾಲ ಇದ್ದರು.

## ಮುಹಮ್ಮದ್(ಸ) – ಮದೀನಾದಲ್ಲಿ

ಮದೀನಾದ ವಾತಾವರಣವೇ ಬೇರೆಯಾಗಿತ್ತು. ಅಲ್ಲಿನ ಜನರು ಪ್ರವಾದಿವರ್ಯರನ್ನೂ(ಸ) ಮಕ್ಕಾದಿಂದ ವಲಸೆ ಬಂದ ಸಂಗಾತಿಗಳನ್ನೂ ಮುಕ್ತ ಮನಸ್ಸಿನಿಂದ ಸ್ವಾಗತಿಸಿದರು. ಮದೀನಾದ ಮುಸ್ಲಿಮರು ಮಕ್ಕಾದಿಂದ ವಲಸೆ ಬಂದ ತಮ್ಮ ಸಹೋದರರನ್ನು ತಮ್ಮ ಮನೆಗಳಲ್ಲಿರಿಸಿದರು. ತಮ್ಮ ಸೊತ್ತು–ವಿತ್ತಗಳಲ್ಲಿ ಅವರನ್ನೂ ಪಾಲುದಾರರಾಗಿ ಮಾಡಿದರು. ತಮ್ಮ ವ್ಯಾಪಾರಗಳಲ್ಲಿ ಅವರನ್ನೂ ಸೇರಿಸಿಕೊಂಡರು. ಈಗ ಒಂದು ದೊಡ್ಡ ಸಂಖ್ಯೆಯ ಜನರು ಇಸ್ಲಾಮ್ ಸ್ವೀಕಾರ ಮಾಡಿ ಆಗಿತ್ತು. ಅವರೆಲ್ಲರೂ ಒಟ್ಟು ಸೇರಿ ಇಸ್ಲಾಮಿನ ಸಂದೇಶ ಪ್ರಚಾರ ಮತ್ತು ಇಸ್ಲಾಮೀ ಸಮಾಜ ವನ್ನು ಸುಭದ್ರಗೊಳಿಸುವುದರಲ್ಲಿ ತಲ್ಲೀನರಾದರು.

ಮದೀನಾಕ್ಕೆ ತಲುಪಿ ಪ್ರವಾದಿಯವರು(ಸ) ಒಂದು ಮಸೀದಿಯನ್ನು ಕಟ್ಟಿಸಿದರು. ಈ ಮಸೀದಿಯು ಕೇವಲ ನಮಾಝ್ ಮಾಡಲಿಕ್ಕಾಗಿರಲಿಲ್ಲ. ಬದಲಾಗಿ ಅದು ಮದೀನಾದಲ್ಲಿ ಸ್ಥಾಪನೆಗೊಳ್ಳಲಿರುವ ಇಸ್ಲಾಮೀ ಸಾಮ್ರಾಜ್ಯದ ಆಡಳಿತ ಕೇಂದ್ರವೂ ಆಗಿತ್ತು. ಪ್ರವಾದಿಯವರು(ಸ) ಇದೇ ಮಸೀದಿಯಲ್ಲಿ ಕುಳಿತು ಜನರಿಗೆ ಬೋಧನೆ ನೀಡುತ್ತಿದ್ದರು. ಆಜ್ಞಾ ವಿಧಿಗಳನ್ನು ಜಾರಿಗೊಳಿಸು ತ್ತಿದ್ದರು ಮತ್ತು ರಾಷ್ಟ್ರದ ರಾಜಕೀಯ ಸಂಬಂಧಿ ವಿಷಯಗಳನ್ನು ನೋಡಿಕೊಳ್ಳು ತ್ತಿದ್ದರು. ಇಲ್ಲಿ ಯಹೂದಿಯರೂ ವಾಸಿಸುತ್ತಿದ್ದರು. ಮಕ್ಕಾದವರು ಯಹೂದಿ ಯರೊಂದಿಗೆ ಸಹಾಯ ಪಡೆಯದಂತಾಗಲು ಪ್ರವಾದಿ(ಸ) ಯಹೂದಿ ಯರೊಂದಿಗೆ ಒಪ್ಪಂದವನ್ನೂ ಮಾಡಿಕೊಂಡರು.

ಇತ್ತ ಮದೀನಾದಲ್ಲಿ ಒಂದು ಭದ್ರ ಇಸ್ಲಾಮೀ ಸಮಾಜವು ನಿರ್ಮಾಣ ಗೊಳ್ಳುತ್ತಿತ್ತು. ಅತ್ತ ಮಕ್ಕಾದ ಜನರು ಮುಹಮ್ಮದ್‌ರವರ(ಸ) ಈ ಯಶಸ್ಸಿ ನಿಂದಾಗಿ ತಳಮಳಗೊಳ್ಳುತ್ತಿದ್ದರು. ಕೊನೆಗೊಮ್ಮೆ ಈ ಶಕ್ತಿಯನ್ನು ಬಲ ಪ್ರಯೋಗಿಸಿ ಸರ್ವನಾಶ ಮಾಡಿ ಬಿಡಬೇಕೆಂಬ ಉದ್ದೇಶದಿಂದ ಮಕ್ಕಾದವರು ಸರ್ವಶಕ್ತಿಯೊಂದಿಗೆ ಮದೀನಾದ ಕಡೆಗೆ ಹೊರಟರು. ಒಂದು ಸಾವಿರ ಯೋಧರ ಮಕ್ಕಾದ ಸೇನೆಯು ಮದೀನಾ ಗಡಿಗೆ ತಲಪಿತ್ತು. ಮುಸ್ಲಿಮರ

ಬಳಿ ಸೇನಾ ಬಲವಿರಲಿಲ್ಲ. ಆದರೆ ಆತ್ಮರಕ್ಷಣೆಗಾಗಿ ಹೋರಾಡದೆ ಗತ್ಯಂತರ ವಿರಲಿಲ್ಲ. 313 ಮಂದಿಯ ಚಿಕ್ಕ ತಂಡದೊಂದಿಗೆ ಮುಹಮ್ಮದ್(ಸ)ರವರು ಬದ್ರ್ ಎಂಬ ಸ್ಥಳಕ್ಕೆ ನಡೆದರು. ಮಕ್ಕಾದ ಸತ್ಯನಿಷೇಧಿಗಳು ವಿಜಯ ಹೊಂದಲಿಕ್ಕಾಗಿ ಬಂದಿದ್ದರು. ಆದ್ದರಿಂದ ಅವರೇ ಯುದ್ಧಾರಂಭ ಮಾಡಿದರು. ಮುಹಮ್ಮದ್(ಸ) ಮತ್ತು ಅವರ ಸಂಗಾತಿಗಳು ಸ್ಥಿರಚಿತ್ತರಾಗಿ ಎದುರಿಸಿ ಅವರನ್ನು ಸೋಲಿಸಿದರು. ಶತ್ರು ಸೇನೆಯ 70 ಮಂದಿ ಹತರಾಗಿ, ಅಷ್ಟೇ ಮಂದಿ ಸೆರೆ ಹಿಡಿಯಲ್ಪಟ್ಟರು. ಮುಸ್ಲಿಮ್ ಸೇನೆಯ 14 ಮಂದಿ ಹುತಾತ್ಮ ರಾದರು. ಈ ಯುದ್ಧವನ್ನು ಮುಸ್ಲಿಮರು ಸತ್ಯವಿಶ್ವಾಸ, ದೃಢನಂಬಿಕೆ, ಐಕ್ಯ ಮತ್ತು ಅರ್ಪಣಾಭಾವದಂತಹ ಗುಣಗಳಿಂದಾಗಿ ಗೆದ್ದರು ಮತ್ತು ಮಕ್ಕಾದವರ ಮಹತ್ವಾಕಾಂಕ್ಷೆಯನ್ನು ಈಡೇರಲು ಬಿಡಲಿಲ್ಲ. ಕೆಲವು ದಿನಗಳ ನಂತರ ಇನ್ನಷ್ಟು ಸಶಸ್ತ್ರ ಸೇನಾಬಲದೊಂದಿಗೆ ಮಕ್ಕಾದ ಜನರು ಮದೀನಾದ ಮೇಲೆ ಆಕ್ರಮಣ ನಡೆಸಿದರು. ನಗರದ ಹೊರ ಭಾಗದ ಉಹುದ್ ಎಂಬ ಸ್ಥಳದಲ್ಲಿ ಪುನಃ ಯುದ್ಧ ನಡೆಯಿತು. ಈ ಬಾರಿ ಮದೀನಾದವರಿಗೆ ಹೆಚ್ಚು ಹಾನಿಯುಂಟಾಯಿತು. ಆದರೆ ಮದೀನಾದ ಇಸ್ಲಾಮೀ ಸಾಮ್ರಾಜ್ಯ ಉಳಿಯಿತು. ಮಕ್ಕಾದವರು ಮರಳಬೇಕಾಗಿ ಬಂತು.

## ಯುದ್ಧರಂಗದ ನೀತಿ ಸಂಹಿತೆ

ಈ ಹಿಂದೆ ವಿವರಿಸಿರುವಂತೆ, ಯುದ್ಧ-ಕಲಹಗಳೆಂದರೆ ಅರಬರಿಗೆ ಪಂಚಪ್ರಾಣ. ಯಾರೊಂದಿಗಾದರೂ ವೈರ ಕಟ್ಟಿಕೊಂಡರೆ ಬಹಳ ಕಠೋರವಾಗಿ ವರ್ತಿಸುತ್ತಿದ್ದರು. ಮಾನವೀಯತೆಯೆಂಬುದೇ ಅವರಲ್ಲಿರುತ್ತಿರಲಿಲ್ಲ. ಬರ್ಬರತೆಯ ಎಲ್ಲ ಮೇರೆಗಳನ್ನೂ ಅವರು ಮೀರುತ್ತಿದ್ದರು. ಯುದ್ಧದ ವೇಳೆ ಎಲ್ಲವೂ ಅವರ ಮಟ್ಟಿಗೆ ಸರಿಯೆನಿಸುತ್ತಿತ್ತು. ಮುಹಮ್ಮದ್‌ರವರು(ಸ) ಅವರಲ್ಲಿ ದ್ವೇಷದ ಬದಲು ಕರುಣೆಯ ಗುಣವನ್ನು ಬೆಳೆಸಿದರು. ಈ ಗುಣ ವನ್ನು ಯುದ್ಧರಂಗಕ್ಕೂ ಕೊಂಡೊಯ್ದರು. ಅವರಿಗೆ ಮಾನವೀಯತೆಯನ್ನು ಕಲಿಸಿದರು. ಅದನ್ನು ಯುದ್ಧರಂಗದಲ್ಲೂ ಪ್ರದರ್ಶಿಸಿದರು. ಮೃತರನ್ನು ಗೌರವಿಸಬೇಕು, ಅವರ ಅವಯವಗಳನ್ನು ತುಂಡರಿಸಬಾರದು, ಮಕ್ಕಳು-

ಮಹಿಳೆಯರು ಮತ್ತು ವೃದ್ಧರನ್ನು ಕೊಲ್ಲಬಾರದು. ಖರ್ಜೂರ ಮತ್ತಿತರ ಫಲ ನೀಡುವ ಮರಗಳನ್ನು ಕಡಿಯಬಾರದು. ಬೆಳೆಗಳನ್ನು ನಾಶ ಮಾಡಬಾರದು. ವಿಶ್ವಾಸ ಘಾತಕ ಮಾಡಬಾರದು. ಸಂಧಾನಗಳನ್ನು ಮುರಿಯಬಾರದು ಇತ್ಯಾದಿ ಆಜ್ಞೆಗಳನ್ನು ಪ್ರವಾದಿವರ್ಯರು(ಸ) ಯುದ್ಧರಂಗದಲ್ಲಿ ನೀಡಿದರು. ಸಮರಾರ್ಜಿತ ಸೊತ್ತು ಮತ್ತು ಯುದ್ಧ ಕೈದಿಗಳ ಬಗ್ಗೆಯೂ ಮಾನವೀಯತೆ ಯಿಂದ ವರ್ತಿಸಲು ಕಲಿಸಿದರು. ಯುದ್ಧದ ವೇಳೆ ಕಲಿಸಲಾದ ಪ್ರಸ್ತುತ ಎಲ್ಲ ಆಜ್ಞೆಗಳನ್ನೂ ಪ್ರವಾದಿವರ್ಯರ(ಸ) ಸಂಗಾತಿಗಳು ಶಿರಸಾ ವಹಿಸಿ ತೋರಿಸಿದರು. ಆ ಕಾಲದಲ್ಲಿ ಅಂತಹ ನೀತಿ ಸಂಹಿತೆಯೇನೂ ಇರಲಿಲ್ಲ. ಇಂದು ಒಮ್ಮೆ ಯುದ್ಧ ಆರಂಭವಾಗಿ ಬಿಟ್ಟರೆ ಯಾವುದೇ ನೀತಿ ಸಂಹಿತೆ ಯನ್ನು ಪಾಲಿಸಲು ಯಾರೂ ಸಿದ್ಧರಿರುವುದಿಲ್ಲ.

## ಮಹಾ ವಿಜಯದ ಕಡೆಗೆ

ಮುಸ್ಲಿಮರು ಮಕ್ಕಾವನ್ನು ತೊರೆದು ಆರು ವರ್ಷಗಳಾಗಿದ್ದುವು. ಒಮ್ಮೆ ಮಕ್ಕಾಕ್ಕೆ ತೆರಳಿ ಹಜ್ಜ್ ಕರ್ಮ ನಿರ್ವಹಿಸಬೇಕೆಂಬ ಅಭಿಲಾಷೆ ಅವರಲ್ಲಿ ಮೂಡಿತು. ಮುಹಮ್ಮದ್‌ರವರು(ಸ) ತಮ್ಮ 1,400 ಸಂಗಾತಿಗಳೊಂದಿಗೆ ಮಕ್ಕಾದ ಕಡೆಗೆ ಪ್ರಯಾಣ ಬೆಳೆಸಿದರು. ಹುದೈಬಿಯಾ ಎಂಬಲ್ಲಿ ಅವರು ಬೀಡು ಬಿಟ್ಟರು. ಅಲ್ಲಿ ಮಕ್ಕಾದವರ ಜತೆ ನಡೆದ ಒಪ್ಪಂದದಲ್ಲಿ, ಮುಸ್ಲಿಮರು ಈ ವರ್ಷ ಹಜ್ಜ್ ಕರ್ಮ ನಿರ್ವಹಿಸದೆ ಮರಳಿ ಹೋಗಬೇಕು ಮತ್ತು ಮುಂದಿನ ವರ್ಷ ಅದಕ್ಕಾಗಿ ಬರಬಹುದು ಎಂಬ ಒಂದು ಶರತ್ತೂ ಇತ್ತು. ಅದರಂತೆ ಅವರು ಮದೀನಾಕ್ಕೆ ಮರಳಿದರು.

ಪ್ರವಾದಿ ಮುಹಮ್ಮದ್(ಸ) ಅಲ್ಲಾಹನ ಸಂದೇಶವನ್ನು ಜನರಿಗೆ ತಲಪಿಸುತ್ತಲೇ ಇದ್ದರು. ರೋಮ್ ಮತ್ತು ಇರಾನಿನ ರಾಜರುಗಳಿಗೆ ಪತ್ರ ಬರೆದು ಅವರಿಗೆ ಇಸ್ಲಾಮಿನ ಕರೆ ನೀಡಿದರು. ಮಕ್ಕಾದವರ ಹಗೆತನ ಮುಂದುವರಿದಿತ್ತು. ಅವರು ಮುಸ್ಲಿಮರ ಒಂದು ಒಪ್ಪಂದಬದ್ಧ ಗೋತ್ರದ ವ್ಯಕ್ತಿಯನ್ನು ವಧಿಸಿದಾಗ ಮುಸ್ಲಿಮರು ಹುದೈಬಿಯಾ ಒಪ್ಪಂದ ಅನೂರ್ಜಿತ ಗೊಂಡಿತೆಂದು ಘೋಷಿಸಿದರು. ಅನಂತರ ಮುಸ್ಲಿಮರು ಹತ್ತು ಸಾವಿರ

ಯೋಧರ ಸೇನೆಯೊಂದಿಗೆ ಮಕ್ಕಾದತ್ತ ಸಾಗಿದರು. ಯಾವುದೇ ಪ್ರತಿಭಟನೆಯಿಲ್ಲದೆ ಮಕ್ಕಾ ನಗರದೊಳಗೆ ಪ್ರವೇಶಿಸಿದರು. ಮಕ್ಕಾ ವಿಜಯದ ನಂತರ ಪ್ರವಾದಿ ಮುಹಮ್ಮದ್‌ರವರು(ಸ) ಎಲ್ಲರನ್ನೂ ಕ್ಷಮಿಸಿ ಬಿಟ್ಟಿರುವುದಾಗಿ ಘೋಷಿಸಿದರು, "ಹೋಗಿರಿ! ನಿಮ್ಮ ಮೇಲೆ ಇಂದು ಯಾವ ಆರೋಪವೂ ಇಲ್ಲ. ನೀವೆಲ್ಲರೂ ಸ್ವತಂತ್ರರು."

ಪ್ರವಾದಿಯವರನ್ನು(ಸ) ಈ ವರೆಗೂ ವಿರೋಧಿಸುತ್ತಿದ್ದ ಮಕ್ಕಾದ ಸರದಾರರು, ಹೀಗೆ ಹೇಳತೊಡಗಿದರು, "ನಿಜವಾಗಿಯೂ ನೀವು ಅಲ್ಲಾಹನ ಸಂದೇಶವಾಹಕರೇ; ದೇಶವನ್ನು ಗೆಲ್ಲ ಹೊರಟ ಅರಸರಲ್ಲ. ನಿಮ್ಮ ಸಂದೇಶವು ಸತ್ಯ ಸಂದೇಶವಾಗಿದೆ."

ಆಗ ಪ್ರವಾದಿ(ಸ) ಹೇಳಿದರು, "ಹೌದು, ಕುರೈಶ್ ಜನರೇ, ಕೇಳಿರಿ! ಅಜ್ಞಾನದ ಬಗ್ಗೆ ಹೆಮ್ಮೆಪಟ್ಟುಕೊಳ್ಳುವುದನ್ನು ಮತ್ತು ವಂಶ ಗೌರವದ ದುರಭಿಮಾನವನ್ನು ಅಲ್ಲಾಹನು ಕೊನೆಗೊಳಿಸಿರುವನು. ನೀವೆಲ್ಲರೂ ಆದಮರ ಸಂತತಿಯಾಗಿದ್ದೀರಿ ಮತ್ತು ಆದಮರನ್ನು ಮಣ್ಣಿನಿಂದ ಸೃಷ್ಟಿಸಲಾಗಿದೆ."

## ಪ್ರೇಮದ ಖಡ್ಗ

ನವೋತ್ಥಾನದ ಕಾಲದಲ್ಲಿ ಯೂರೋಪಿನ ರಾಷ್ಟ್ರಗಳು ಕುಪ್ರಚಾರದ ಒಂದು ಅಭಿಯಾನವನ್ನೇ ಕೈಗೊಂಡಿದ್ದುವು. ಮುಸ್ಲಿಮರ ಆಡಳಿತ ಅಥವಾ ಮುಸ್ಲಿಮ್ ಬಾಹುಳ್ಯದ ಪ್ರದೇಶಗಳಲ್ಲಿ ಈ ರಾಷ್ಟ್ರಗಳು ಸೇನಾ ಬಲದಿಂದ ಅಸ್ತಿತ್ವಕ್ಕೆ ಬಂದಿದ್ದುವು. ಅವು "ಇಸ್ಲಾಮ್ ಖಡ್ಗದ ಮೂಲಕ ಪ್ರಚಾರಗೊಂಡಿತು" ಎಂದು ಪ್ರಚಾರ ಮಾಡಿದುವು. ಇದೊಂದು ಅಪ್ಪಟ ಸುಳ್ಳಾಗಿದ್ದು, ಇದನ್ನು ಪ್ರಚಾರ ಬಲದಿಂದ ವ್ಯಾಪಕಗೊಳಿಸಲಾಯಿತು.

ಇಸ್ಲಾಮ್ ಎಂಬ ಪದದ ಅರ್ಥ 'ಶಾಂತಿ' ಮತ್ತು 'ನಿಶ್ಶರ್ತವಾಗಿ ತಲೆ ಬಾಗುವುದು' ಎಂದಾಗಿದೆ. ಶಾಂತಿ ದ್ಯೋತಕವಾದ ಇಸ್ಲಾಮ್ ಶಾಂತಿಯನ್ನೇ ಹರಡುತ್ತದೆ ಮತ್ತು ಶಾಂತಿಯಿಂದಲೇ ಹರಡುತ್ತದೆ. ಇಸ್ಲಾಮ್ ಯಾವ ನಿಶ್ಶರ್ತ ಅನುಸರಣೆಯನ್ನು ಬಯಸುತ್ತದೋ ಅದನ್ನು ಖಡ್ಗದಿಂದ

ಸಾಧಿಸಲು ಸಾಧ್ಯವಿಲ್ಲ. ಅದು ಪ್ರೇಮದ ಖಡ್ಗದಿಂದ ಮಾತ್ರ ಸಾಧ್ಯ. ಬಲವಂತದ ಧರ್ಮ ಪರಿವರ್ತನೆಯನ್ನು ಇಸ್ಲಾಮ್ ಕಟುವಾಗಿ ವಿರೋಧಿಸುತ್ತದೆ. ಅಷ್ಟೇ ಅಲ್ಲ, ಅದು ಇತರ ಧರ್ಮಗಳನ್ನು ಗೌರವಿಸಲು ಕಲಿಸುತ್ತದೆ.

ಇಸ್ಲಾಮಿನ ಪ್ರಚಾರ ಹೇಗಾಯಿತೆಂದು ಇತಿಹಾಸವನ್ನು ಕೆದಕುವುದು ಇಲ್ಲಿ ಉದ್ದೇಶವಲ್ಲ. ಕೇವಲ ಭಾರತದ ಉದಾಹರಣೆಯನ್ನೇ ನೋಡೋಣ. ಭಾರತಕ್ಕೆ ಇಸ್ಲಾಮ್ ಅದರ ಆರಂಭದ ಶತಮಾನದಲ್ಲೇ ಪ್ರವೇಶಿಸಿತ್ತು. ಕೇರಳ ಮತ್ತು ಗುಜರಾತ್‌ನಲ್ಲಿ ಸರಕು ಮಾರಾಟಕ್ಕಾಗಿ ಅರೇಬಿಯಾದಿಂದ ಬರುವ ವರ್ತಕರ ಮೂಲಕವೂ ಉತ್ತರ ಭಾರತದಲ್ಲಿ ಸೂಫೀ ಸಂತರ ಮೂಲಕವೂ ಇಸ್ಲಾಮ್ ಬಂದಿತ್ತು. ಇಸ್ಲಾಮ್ ಗಜನಿ ಮಹಮೂದನ ಮೂಲಕವಾಗಲಿ, ಬಾಬರ್, ಅಕ್ಬರ್, ಔರಂಗಜೇಬ್ ಮತ್ತು ನಾದಿರ್‌ಶಾರ ಮೂಲಕವಾಗಿ ಇಲ್ಲಿ ಪ್ರಚಾರಗೊಳ್ಳಲಿಲ್ಲವೆಂದು ಪೂರ್ಣ ಆತ್ಮವಿಶ್ವಾಸದೊಂದಿಗೆ ಹೇಳಬಹುದು. ಅವರ ಖಡ್ಗಗಳು ಒಬ್ಬರನ್ನಾದರೂ ಇಸ್ಲಾಮಿಗಾಗಿ ಮಣಿಸಲಿಲ್ಲವೆಂಬುದೇ ಸತ್ಯ.

## ಸಮಾನತೆ ಮತ್ತು ನ್ಯಾಯದ ವಾಹಕ

ಇಸ್ಲಾಮ್ ನ್ಯಾಯ ಮತ್ತು ಸಮಾನತೆಯನ್ನು ಬೋಧಿಸುವ ಧರ್ಮವಾಗಿದೆ. ಯಾರಿಗೂ ಅನ್ಯಾಯವಾಗದ, ಅಸಮಾನತೆಯಿಲ್ಲದ ಒಂದು ಸಮಾಜದ ನಿರ್ಮಾಣವೇ ಇಸ್ಲಾಮಿನ ಗುರಿ. ಪ್ರವಾದಿ ಮುಹಮ್ಮದ್‌ರವರು(ಸ) ಉಚ್ಚ-ನೀಚತೆಯಾಗಲಿ, ಅಸ್ಪೃಶ್ಯತೆಯಾಗಲಿ ಇಲ್ಲದ ಹಾಗೂ ಭಂಡವಾಳಶಾಹಿಗಳು ಮತ್ತು ಒಪ್ಪೊತ್ತಿನ ಊಟಕ್ಕೂ ಗತಿಯಿಲ್ಲದ ದರಿದ್ರರು ಎಂಬ ಭೇದ ಭಾವವಿಲ್ಲದ ಸಮಾಜವನ್ನು ನಿರ್ಮಿಸುವುದರಲ್ಲಿ ಯಶಸ್ವಿಯಾದರು. ಇಸ್ಲಾಮೀ ನ್ಯಾಯ ವ್ಯವಸ್ಥೆಯಲ್ಲಿ ಯಾರೂ ದೊಡ್ಡವರಲ್ಲ ಮತ್ತು ಯಾರೂ ಸಣ್ಣವರಲ್ಲ. ಎಲ್ಲರೂ ಸಮಾನರು. ಗ್ರಾಮ ಪ್ರದೇಶದಲ್ಲಿ ಓರ್ವ ಮುದುಕಿಗೆ ಕೂಡಾ ಇಸ್ಲಾಮೀ ವ್ಯವಸ್ಥೆಯಡಿಯಲ್ಲಿ ಆತ್ಮಾಭಿಮಾನದೊಂದಿಗೆ ಜೀವಿಸಬಹುದಾಗಿತ್ತು ಮತ್ತು ಅತ್ಯಂತ ಸುಲಭದಲ್ಲಿ ನ್ಯಾಯ ದೊರಕಿಸಿಕೊಳ್ಳಬಹುದಿತ್ತು.

ಪ್ರವಾದಿ ಮುಹಮ್ಮದ್‌ರವರು(ಸ) ಸಮಾಜದ ದುರ್ಬಲ ಮತ್ತು ನಿರ್ಗತಿಕರಲ್ಲಿ ಆತ್ಮಾಭಿಮಾನ ಮತ್ತು ಆತ್ಮವಿಶ್ವಾಸವನ್ನು ಬೆಳೆಸಿದರು. ಪ್ರವಾದಿಯವರ(ಸ) ದಾರಿಯಲ್ಲಿ ಮುಳ್ಳು ಹರಡುತ್ತಿದ್ದ ವ್ಯಕ್ತಿಯನ್ನು ಕೂಡಾ ಅವರು ಕ್ಷಮಿಸಿದರು; ಮಾತ್ರವಲ್ಲ ಆತನಿಗೆ ಸಹಾಯವನ್ನೂ ಒದಗಿಸಿದರು. ಗುಲಾಮರನ್ನು ವಿಮೋಚಿಸಿದರು. ಹೆಣ್ಣು ಮಕ್ಕಳನ್ನು ಜೀವಂತ ಹೂಳುವ ದುಷ್ಟ ಸಂಪ್ರದಾಯವನ್ನು ಅಳಿಸಿ ಹಾಕಿದರು. ವಿಧವೆಯರ ಪುನರ್‌ವಿವಾಹದ ವ್ಯವಸ್ಥೆಯನ್ನು ಜಾರಿಗೊಳಿಸಿದರು. ಕೈದಿಗಳ ಮತ್ತು ಅನಾಥರ ಆಶ್ರಯದಾತ ರಾದರು. ಸಹಾಯ ಮಾಡಲು ಯಾರೂ ಇಲ್ಲದವರಿಗೆ ಸ್ವಯಂ ಸಹಾಯ ಮಾಡಿದರು. ಈ ಎಲ್ಲ ಸದ್ಗುಣಗಳನ್ನು ಪ್ರವಾದಿ(ಸ) ತಮ್ಮ ಸಂಗಾತಿಗಳಲ್ಲೂ ಬೆಳೆಸಿದರು. ಇದರ ಪರಿಣಾಮವಾಗಿ ದುರ್ಬಲರಿಗೆ ನೆರವಾಗುವ ವಿಷಯದಲ್ಲಿ ಅವರೊಳಗೆ ಸ್ಪರ್ಧೆ ನಡೆಯುತ್ತಿತ್ತು.

ಅಲ್ಲಾಹನ ಈ ಅಂತಿಮ ಪ್ರವಾದಿ ಮುಹಮ್ಮದ್‌ರವರದು(ಸ) ಒಂದು ಅತ್ಯಾಕರ್ಷಕ ವ್ಯಕ್ತಿತ್ವವಾಗಿತ್ತು. ಅವರ ಜೀವನ ಅತ್ಯಂತ ಸರಳವಾಗಿತ್ತು. ಅದರಲ್ಲಿ ವಿರೋಧಾಭಾಸವಿರಲಿಲ್ಲ. ವೈಯಕ್ತಿಕ ಮತ್ತು ಸಾಮಾಜಿಕ ಜೀವನದಲ್ಲಿ ದೊಡ್ಡ ಕ್ರಾಂತಿಯುಂಟಾಯಿತಾದರೂ ಈ ಮಹಾನ್ ಆದರ್ಶ ವ್ಯಕ್ತಿಯು ಎಲ್ಲ ಸಂದರ್ಭಗಳಲ್ಲೂ ಉನ್ನತ ಮಾದರಿಯನ್ನೇ ಪ್ರದರ್ಶಿಸಿದರು. ಪ್ರವಾದಿ ಯಾಗುವುದಕ್ಕಿಂತ ಮುಂಚೆಯಾಗಲಿ, ಅನಂತರವಾಗಲಿ ಅವರ ಗೃಹ ಜೀವನ ದಲ್ಲೂ ಹೊರಗಿನ ಜೀವನದಲ್ಲೂ ಯಾವುದೇ ಅಂತರವಿರಲಿಲ್ಲ. ಆಡಂಬರವನ್ನು ಅವರು ಮೆಚ್ಚುತ್ತಿರಲಿಲ್ಲ. ಅವರು ಸಾಮಾನ್ಯ ಉಡುಪು ಧರಿಸುತ್ತಿದ್ದರು. ಬಿಳಿ ಬಟ್ಟೆಯೆಂದರೆ ಅವರಿಗೆ ತುಂಬಾ ಇಷ್ಟ. ನಿಲುವಂಗಿ ಇಷ್ಟಪಡುತ್ತಿದ್ದರು. ಅದರೊಂದಿಗೆ ಲುಂಗಿಯನ್ನೂ ಉಟ್ಟುಕೊಳ್ಳುತ್ತಿದ್ದರು. ಸುಗಂಧ ದ್ರವ್ಯ ಹಚ್ಚು ತ್ತಿದ್ದರು. ತಲೆಕೂದಲನ್ನು ಯಾವಾಗಲೂ ಬಾಚಿರುತ್ತಿದ್ದರು. ಅಸ್ತವ್ಯಸ್ತ ತಲೆಗೂದಲಿನಲ್ಲಿ ಯಾರಾದರೂ ಬಂದರೆ ಅವನ ಬಳಿ ಬಾಚಣಿಗೆ. ಇಲ್ಲವೇ ಎಂದು ಕೇಳುತ್ತಿದ್ದರು. ನಡೆಯುವಾಗ ಕಾಲೂರಿ ನೆಟ್ಟಗೆ

ನಡೆಯುತ್ತಿದ್ದರು. ಮಾತಾಡುವಾಗ ತಡೆದು ತಡೆದು ಅಗತ್ಯದ ಮಾತುಗಳನ್ನೇ ಆಡುತ್ತಿದ್ದರು. ಅನ್ಯಥಾ ಮೌನವಾಗಿರುತ್ತಿದ್ದರು. ಮಾತಾಡುವಾಗಲೆಲ್ಲಾ ಮಂದಸ್ಮಿತರಾಗಿರು ತ್ತಿದ್ದರು. ಸರಳ ಭಾಷೆಯನ್ನು ಉಪಯೋಗಿಸುತ್ತಿದ್ದರೂ ಅದು ಸಾಹಿತ್ಯ ಪೂರ್ಣವಾಗಿರುತ್ತಿತ್ತು. ಪ್ರವಾದಿವರ್ಯರಿಗೆ(ಸ) ಕೋಪ ಬರುವುದು ಬಹಳ ಕಡಿಮೆ. ಆದರೂ ಮಾನವನೆಂಬ ನೆಲೆಯಲ್ಲಿ ಕೆಲವೊಮ್ಮೆ ಅವರಿಗೆ ಕೋಪ ಬರುತ್ತಿತ್ತು. ಆಗ ಅವರ ಮುಖ ಕೆಂಪಾಗುತ್ತಿತ್ತು. ಆದರೆ ಅವರ ಬಾಯಿಯಿಂದ ಬೈಗುಳವಾಗಲೀ ಅಶ್ಲೀಲ ಶಬ್ದಗಳಾಗಲೀ ಎಂದೂ ಹೊರಡುತ್ತಿರಲಿಲ್ಲ. ರಸ್ತೆಯಲ್ಲಿ ಎದುರಿಗೆ ಬಂದವರಿಗೆ, ಅದು ಚಿಕ್ಕ ಮಕ್ಕಳಾದರೂ ಸರಿ, ಮೊದಲು ಸಲಾಮ್ ಹೇಳುತ್ತಿದ್ದರು. ಯಾವುದೇ ಸಭೆ–ಸಮಾರಂಭಗಳಿಗೆ ಹೋದರೆ ಎಲ್ಲಿ ಸ್ಥಳ ಸಿಗುವುದೋ ಅಲ್ಲಿ ಕುಳಿತುಕೊಳ್ಳುತ್ತಿದ್ದರು. ಮುಂದೆ ಹೋಗಲಿಕ್ಕಾಗಲಿ, ವಿಶಿಷ್ಟ ಸ್ಥಳದಲ್ಲಿ ಕುಳಿತುಕೊಳ್ಳಲಿಕ್ಕಾಗಲಿ ಪ್ರಯತ್ನಿಸುತ್ತಿರಲಿಲ್ಲ. ಯಾರದಾದರೂ ಅನಾರೋಗ್ಯದ ಸುದ್ದಿ ದೊರೆತೊಡನೆ ಅವರನ್ನು ಸಂದರ್ಶಿಸಲು ಹೋಗುತ್ತಿದ್ದರು ಮತ್ತು ಅವರ ಆರೋಗ್ಯ ಪ್ರಾಪ್ತಿಗಾಗಿ ಪ್ರಾರ್ಥಿಸುತ್ತಿದ್ದರು. ಯಾರಾದರೂ ನಿಧನ ಹೊಂದಿದರೆ ಅವರ ಮನೆಗೆ ಹೋಗಿ ಮನೆ ಮಂದಿಗೆ ಸಾಂತ್ವನ ಹೇಳಿ ಅವರಲ್ಲಿ ಧೈರ್ಯ ತುಂಬುತ್ತಿದ್ದರು. ಮಕ್ಕಳನ್ನು ಮುದ್ದಿಸುತ್ತಿದ್ದರು. ವೃದ್ಧರನ್ನು ಗೌರವಿಸುತ್ತಿದ್ದರು ಮತ್ತು ಸೇವಕರೊಂದಿಗೆ ಉತ್ತಮ ರೀತಿಯಲ್ಲಿ ವರ್ತಿಸುತ್ತಿದ್ದರು. ಸೇವಕರೊಂದಿಗೆ ಸೇರಿ ಕೆಲಸಗಳನ್ನು ಮಾಡುತ್ತಿದ್ದರು ಮತ್ತು ಅವರೊಂದಿಗೆ ಸಮಾನವಾಗಿ ವ್ಯವಹರಿಸುತ್ತಿದ್ದರು. ಯಾರನ್ನೂ ಕೀಳಾಗಿ ಕಾಣುತ್ತಿರಲಿಲ್ಲ ಮತ್ತು ಯಾರದೇ ಆತ್ಮಾಭಿಮಾನಕ್ಕೆ ಎಂದೂ ಚ್ಯುತಿಯುಂಟು ಮಾಡುತ್ತಿರಲಿಲ್ಲ. ದೈನಂದಿನ ವ್ಯವಹಾರಗಳಲ್ಲಿ ಸಾಮಾನ್ಯ ಜನರಿಗಿಂತ ಭಿನ್ನವೆಂದೂ ದೊಡ್ಡವರೆಂದೂ ಹೇಳಿಸಿಕೊಳ್ಳುತ್ತಿರಲಿಲ್ಲ. ಏನೂ ಹೇಳುತ್ತಿದ್ದರೋ ಅದನ್ನು ಮೊದಲು ಸ್ವಯಂ ಆಚರಿಸಿ ತೋರಿಸುತ್ತಿದ್ದರು. ಆದುದರಿಂದಲೇ ದೇವನು ಅವರನ್ನು ಆದರ್ಶ ಪುರುಷನನ್ನಾಗಿ ಮಾಡಿದನು.

ಸಕಲ ಮಾನವರಿಗಾಗಿ!